**ಲೋಕೋಪಯೋಗಿ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರ್‌ರ, ಕೋಲಾರ ವಿಭಾಗ, ಕೋಲಾರ**

**ಟೆಂಡರ್ ಅಧಿಸೂಚನೆ ಸಂಖ್ಯೆ: 35 : 2005-2006, ದಿನಾಂಕ: 20ನೇ ಜನವರಿ 2006.**

**ಅಲ್ಪಾವಧಿ ಬಾಬುವಾರು ದರದ ಟೆಂಡರುಗಳಿಗಾಗಿ ಅರ್ಜಿ ಆಹ್ವಾನ (1ನೇ ಕರೆ)**

ಈ ಕೆಳಗೆ ತಿಳಿಸಿದ ಕಾಮಗಾರಿಗಾಗಿ ನಿರ್ಧಿಷ್ಟ ಪಡಿಸಿದ ನಮೂನೆಗಳನ್ನು ನೊಂದಾಯಿತ ಕರಾರುದಾರರಿಂದ ದ್ವಿಪ್ರತಿಗಳಲ್ಲಿ ಮೊಹರು ಮಾಡಲಾದ ಟೆಂಡರ್‌ಗಳನ್ನು ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಆಧ್ಯಾದೇಶ 2000 ರ ಅನ್ವಯ ಈ ಕೆಳಗೆ ಸಹಿ ಮಾಡಿದವರು ಕರೆದಿರುತ್ತಾರೆ. ಅವುಗಳನ್ನು ಈ ಕೆಳಗೆ ಸಹಿ ಮಾಡಿದವರು ತಮ್ಮ ಕಛೇರಿಯಲ್ಲಿ ಆ ಕಾಮಗಾರಿ ಪ್ರತಿಯೊಂದು ಕಾಮಗಾರಿಯೆದುರು ನಮೂದಿಸಿದ ದಿನಾಂಕಗಳಂದು ಸಂಜೆ 4-00 ಗಂಟೆಯವರೆಗೆ ಸ್ವೀಕರಿಸುತ್ತಾರೆ. ಆ ಟೆಂಡರುಗಳನ್ನು ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ದಿನಾಂಕ 08.02.2006 ರಂದು ಸಂಜೆ 4-30 ಗಂಟೆಗೆ ಸಾಧ್ಯವಾದರೆ ತೆರೆಯಲಾಗುವುದು.

**ಕಾಮಗಾರಿಗೆ :** ಪ್ರತಿಯೊಂದು ಕಾಮಗಾರಿಗೆ ಸಂಬಂಧಿಸಿದ ಮುದ್ರಿತ ಕರಾರು ದಾಸ್ತಾವೇಜುಗಳು ಅಂದರೆ ರೇಖಾ ಚಿತ್ರಗಳು ಪೂರ್ಣ ತಂಡ ಮಾಡಬೇಕಾದ ಕಾಮಗಾರಿಗಳ ಪೂರ್ಣ ತಪಶೀಲು ಮಾಡಬೇಕಾದ ಕಾಮಗಾರಿಗಳ ವಿವಿಧ ವರ್ಗಗಳ ಪರಿಮಾಣದ ಷೆಡ್ಯೂಲ್ ಅಗತ್ಯವಿರುವಲ್ಲಿ ಕಲ್ಲುಗಣಿ ಚಾರ್ಟುಗಳು ಮತ್ತು ಯಾರ ಟೆಂಡರು ಸ್ವೀಕೃತವಾಗುತ್ತದೋ ಆ ವ್ಯಕ್ತಿಯು ಮಾಡಬೇಕಾದ ಕರಾಗಿನ ಷರತ್ತುಗಳು ಇವುಗಳನ್ನು ಆದಕ್ಕಾಗಿ ಅರ್ಜಿ ಸಲ್ಲಿಸಿ ಟೆಂಡರ್ ದಾಖಲೆಗಳ ಬಿಲ್ಲನ್ನು ಸಂದಾಯ ಮಾಡಿದ ತರುವಾಯ ಅವುಗಳಲ್ಲಿ ಕಾಮಗಾರಿಯ ಎದುರು ಹೇಳಲಾದ ದಿನಾಂಕದಂದು ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಖರೀದಿಸಬಹುದು. ಇದಲ್ಲದೇ ಕರಾರುದಾರರು ಸಧ್ಯದಲ್ಲಿ ತಾವು ಕಾರ್ಯನಿರ್ವಹಿಸುತ್ತಿರುವಂತಹ ಕಾಮಗಾರಿಗಳ ಒಂದು ಪಟ್ಟಿಯನ್ನು ಈ ಕೆಳಗೆ ಸಹಿ ಹಾಕಿದವರ ಮಾಹಿತಿಗಾಗಿ ಸಲ್ಲಿಸಬೇಕೆಂದು ಕೋರಲಾಗಿದೆ.

ಟೆಂಡರು ಸಲ್ಲಿಸಬಯಸುವ ಕರಾರುದಾರರು ಟೆಂಡರ್ ಸೂಚನೆ (ಭಾಗ-1 ಪಿಡಬ್ಲ್ಯೂಜಿ 66) ರಲ್ಲಿ ಒಳಗೊಂಡ ವಿವರವಾದ ಸೂಚನೆಗಳು ಮತ್ತು ಷರತ್ತುಗಳನ್ನು ತಪ್ಪದೇ ಪಾಲಿಸಬೇಕೆಂಬುದನ್ನು ಗಮನಿಸಬೇಕು. ಇದರ ನೋಟೀಸು ಅವರು ಕೊಂಡುಕೊಳ್ಳುವ ಟೆಂಡರ್ ದಾಖಲೆಗಳ ಒಂದು ಭಾಗವಾಗಿರುತ್ತದೆ. ಸಂಚಕಾರ ಠೇವಣಿಯ ಮೊಬಲಗು, ನಮೂನೆ ಹಾಗೂ ಸಿಂಧುತ್ವ ಅವಧಿಯ ಸಂಬಂಧಪಟ್ಟ ವಿವರಗಳು ಟೆಂಡರ್‌ಗಳನ್ನು ಸಲ್ಲಿಸುವಾಗ ಮತ್ತು ಟೆಂಡರ್ ದಸ್ತಾವೇಜುಗಳನ್ನು ಭರ್ತಿ ಮಡುವಾಗ ಕರಾರುದಾರರು ಅನುಸರಿಸಬೇಕಾದ ಕಾರ್ಯವಿಧಾನ, ನೀಡಿಕೆ ಆಹ್ವಾನದ ಅವಧಿಯ ಸಿಂಧುತ್ರವ, ಟೆಂಡರುಗಳನ್ನು ತೆಗೆಯುವುದು, ತಪ್ಪುಗಳನ್ನು ದೋಷಗಳನ್ನು ಸರಿಪಡಿಸುವಿಕೆ ಕೆಲವು ಸಂದರ್ಭಗಳಲ್ಲಿ ಮೌಲ್ಯ ನಿರ್ಧರಣೆ ಪದ್ಧತಿ, ಕರಾರುದಾರು ಬಾಕೀದಾರರಾದಾಗ ಪರಿಣಾಮಗಳು ಯಶಸ್ವಿ ಟೆಂಡರುದಾರರಿಂದ ಸಂದಾಯ ಮಾಡಬೇಕಾದ ಭದ್ರತಾ ಠೇವಣಿ ಬೆಲೆ ಹೊಂದಾಣಿಕೆ ಇತ್ಯಾದಿಗಳು ಸಹಾ ಟೆಂಡರು ಸೂಚನೆ (ಭಾಗ-1 ಪಿಡಬ್ಲ್ಯೂಜಿ 66) ರಲ್ಲಿ ಲಭ್ಯವಿರುತ್ತದೆ.

ಕರಾರುದಾರರಿಗೆ ಹೆಚ್ಚಿನ ವಿವರಗಳೇನಾದರೂ ಅಗತ್ಯವಿದ್ದಲ್ಲಿ ಅದನ್ನು ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿಯಿಂದ ನಮೂದಿಸಿರುವ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪಡೆದುಕೊಳ್ಳಬಹುದು. ಈ ಕೆಳಗೆ ನಮೂದಿಸಲಾದ ಯಾವುದೇ ದಿನಾಂಕಗಳು ಸಾರ್ವತ್ರಿಕ ರಜಾ ದಿನಗಳಾಗಿರುವಲ್ಲಿ ಆ ದಿನಾಂಕಕ್ಕೆ ಬದಲಾಗಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದೆಂದು ಸೂಚಿಸಲಾಗಿದೆ.

**ಸೂಚನೆ :**

1) ಇ.ಎಂ.ಡಿ.ಯನ್ನು ಕರ್ನಾಟಕ ಸರ್ಕಾರದ ಟ್ರೆಜರಿ ಚಲನ್, ಡಿಮ್ಯಾಂಡ್ ಡ್ರಾಫ್ಟ್, ನ್ಯಾಷನಲ್ ಸೇವಿಂಗ್ಸ್, ಸರ್ಟಿಫಿಕೇಟ್ ರೂಪದಲ್ಲಿ ಸೂಚಿರುವ ಹಣಕ್ಕೆ ತಕ್ಕಂತೆ ಕಾರ್ಯನಿರ್ವಾಹಕ ಇಂಜಿನಿಯರ್, ಕೋಲಾರ ವಿಭಾಗ, ಸಂಪರ್ಕ ಮತ್ತು ಕಟ್ಟಡಗಳು, ಕೋಲಾರ, ಇವರ ಹೆಸರಿನಲ್ಲಿ ಪಾವತಿ ಮಾಡುವುದು.
2) ಯಾವುದೇ ನಿಬಂಧನೆಗಳನ್ನೊಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
3) ಠೇವಣಿ ಕ್ರಮಬದ್ಧತೆಯ (ವ್ಯಾಲಿಡಿಟಿ ಪೀರಿಯಡ್) ತೊಂಬತ್ತು ದಿವಸಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
4) ಅಂದಾಜು ಮೊತ್ತ ಹೆಚ್ಚುವರಿಯಾದಲ್ಲಿ ಇ.ಎಂ.ಡಿ. ವ್ಯತ್ಯಾಸದ ಮೊತ್ತವನ್ನು ಯಶಸ್ವಿ ಟೆಂಡರುದಾರರು ಕರಾರು ಮುಚ್ಚಳಿಕೆ ಸಮಯದಲ್ಲಿ ಪಾವತಿ ಮಾಡಬೇಕು.

| ಕ್ರಮ ಸಂಖ್ಯೆ | ಕೆಲಸದ ಹೆಸರು | ಟೆಂಡರಿ ಗಿಟ್ಟ ಮೊತ್ತ ರೂ. ಲಕ್ಷಗಳಲ್ಲಿ | ಇ.ಎಂ.ಡಿ. ರೂ. | ಟೆಂಡರ್ ದಾಖಲೆಗಳ ವೆಚ್ಚ (ಈ ಹಣವನ್ನು ಹಿಂದಿರುಗಿಸುವುದಿಲ್ಲ ಹಾಗೂ ವರ್ಗಾಯಿಸುವುದಿಲ್ಲ) | ಕರಾರುದಾರ ವರ್ಗ | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತುಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ ಒಟ್ಟು | ಸಂಜೆ 5-30 ವರೆಗೆ ಅರ್ಜಿ ಸ್ವೀಕಾರದ ಕಡೆಯ ದಿನಾಂಕ | ಸಂಜೆ 5-30 ವರೆಗೆ ಟೆಂಡರ್ ದಾಖಲೆಗಳನ್ನು ನೀಡುವ ಕಡೆಯ ದಿನಾಂಕ | ಸಂಜೆ 4-00 ಗಂಟೆವರೆಗೆ ಟೆಂಡರ್‌ಗಳನ್ನು ಸ್ವೀಕರಿಸುವ ಕಡೆಯ ದಿನಾಂಕ |
|---|---|---|---|---|---|---|---|---|---|
| 1 | ಕೋಲಾರ ಜಿಲ್ಲೆ, ಶಿಡ್ಲಘಟ್ಟದಲ್ಲಿ ಜೆ.ಎಂ.ಎಫ್.ಸಿ. ನ್ಯಾಯಧೀಶರಿಗೆ ಎರಡು ವಸತಿ ಗೃಹಗಳನ್ನು ನಿರ್ಮಿಸುವ ಕಾಮಗಾರಿ | 22.70 | 22700.00 | ರೂ. 3000.00 + ಇತರೆ ತೆರಿಗೆಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು | 12 ತಿಂಗಳು | 04.02.2006 | 06.02.2006 | 08.02.2006 |

**ಭರ್ತಿಮಾಡಿದ ಟೆಂಡರಗಳೊಂದಿಗೆ ಗುತ್ತಿಗೆದಾರರು ಸಲ್ಲಿಸಬೇಕಾಗಿರುವ ದಾಖಲೆಗಳು :**

1. ಈ ಮೇಲಿನ ಕಟ್ಟಡ ಕಾಮಗಾರಿಯ ಮಾದರಿಯ ಒಂದು ಕಾಮಗಾರಿಯ ಮೌಲ್ಯ ಟೆಂಡರ್‌ಗೆ ಹಾಕಿರುವ ಮೌಲ್ಯಕ್ಕೆ ಶೇಕಡ 30 % ಕಡಿಮೆ ಇರದ ಮೌಲ್ಯದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯಲ್ಲಿ ಒಂದು ಆರ್ಥಿಕ ವರ್ಷದ ಅವಧಿಯಲ್ಲಿ ತೃಪ್ತಿಕರವಾಗಿ ಪೂರೈಸಿರುವುದರ ಬಗ್ಗೆ ಕಾರ್ಯನಿರ್ವಾಹಕ ಇಂಜನೀಯರ್ ದರ್ಜೆಗೆ ಕಡಿಮೆಯಿರುವ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆದ ಯೋಗ್ಯತಾ ಪತ್ರವನ್ನು ಗುತ್ತಿಗೆದಾರರ ಟೆಂಡರ್ ಜೊತೆಗೆ ಹಾಜರು ಪಡಿಸಿಬೇಕು. ಹಾಗೆ ಮಾಡಲು ವಿಫಲರಾದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.

2. ನಿಗದಿತ ಇ.ಎಂ.ಡಿ. ಯನ್ನು ಈ ಕೆಳಗೆ ಸೂಚಿಸಿರುವವರಿಗೆ ಡಿಮ್ಯಾಂಡ್ ಡ್ರಾಫ್ಟ್ ದ್ವಿಪ್ರತಿಯಲ್ಲಿ ಟ್ರೆಜರಿ ಚಲನನ್ನು ಅಥವಾ ಎನ್.ಎಸ್.ಸಿ. ಬ್ಯಾಂಕ್ ಗ್ಯಾರಂಟಿಗಳನ್ನು ಈ ಕೆಳಗೆ ಸಹಿ ಮಾಡಿರುವವರಿಗೆ ಪಾವತಿಯಾಗುವಂತೆ ಪ್ಲೆಡ್ಜ್ ಮಾಡಿ ಟೆಂಡರ್‌ನೊಂದಿಗೆ ಸಲ್ಲಿಸುವುದು ಹಾಗೂ ಮಾಡಲು ತಪ್ಪಿದಲ್ಲಿ ಟೆಂಡರ್ ಅನ್ನು ತಿರಸ್ಕರಿಸಲಾಗುವುದು.

3. ಗುತ್ತಿಗೆದಾರರು ನೊಂದಾಣಿ ಮತ್ತು ನವೀಕರಣ ಪ್ರಮಾಣ ಪತ್ರದ ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಯಿಂದ ಕ್ರಮವಾಗಿ ಪ್ರಮಾಣೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.

4. ಗುತ್ತಿಗೆದಾರರು ನಿರ್ವಹಿಸಿ ತೃಪ್ತಿಕರವಾಗಿ ಪೂರ್ಣಗೊಳಿಸಿರುವ ಕಾಮಗಾರಿಗಳ ಯೋಗ್ಯತಾ ಪ್ರಮಾಣ ಪತ್ರವನ್ನು ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್ ಅಥವಾ ಕಾರ್ಯನಿರ್ವಾಹಕ ಇಂಜನಿಯರ್‌ರವರಿಂದ ದೃಢೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.

**ಸೂಚನೆ :**

1) ಯಾವ ಕಾರಣವನ್ನು ಸಹಾ ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ನಿರಾಕರಿಸುವ ಅಧಿಕಾರವನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾದಿರಿಸಿಕೊಂಡಿರುತ್ತಾರೆ.

2) ಟೆಂಡರ್ ಫಾರಂಗಳನ್ನು ನೀಡುವ ಸಮಯದಲ್ಲಿ ಗುತ್ತಿಗೆದಾರರು ತಮ್ಮ ಪಾಸ್ ಪುಸ್ತಕವನ್ನು ತಂದು ಅದರಲ್ಲಿ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು. ಇಲ್ಲದಿದ್ದರೆ ಟೆಂಡರ್ ಫಾರಂಗಳಿಗಾಗಿ ಹಣ ಪಾವತಿ ಮಾಡಿದ್ದರೂ ಸಹ ಟೆಂಡರ್ ಫಾರಂಗಳನ್ನು ನೀಡುವುದಿಲ್ಲ. ಹಾಗೂ ಟೆಂಡರ್ ಫಾರಂ ಬೆಲೆಯನ್ನು ಹಿಂದಿರುಗಿಸುವುದಿಲ್ಲ.

3) ಭರ್ತಿಮಾಡಿದ ಟೆಂಡರ್ ನಮೂನೆಗಳನ್ನು ಟೆಂಡರ್ ಪೆಟ್ಟಿಗೆಗೆ ಹಾಕುವ ಸಮಯದಲ್ಲಿ ಗುತ್ತಿಗೆದಾರರು ತಮ್ಮ ಪಾಸ್ ಪುಸ್ತಕದಲ್ಲಿ ಸಂಬಂಧಪಟ್ಟವರಿಂದ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು. ಇಲ್ಲದ ಪಕ್ಷದಲ್ಲಿ ಭರ್ತಿ ಮಾಡಿಲ್ಪಟ್ಟ ಟೆಂಡರ್ ನಮೂನೆಗಳನ್ನು ಟೆಂಡರ್ ಪೆಟ್ಟಿಗೆಗೆ ಹಾಕಲು ಅವಕಾಶ ನೀಡುವುದಿಲ್ಲ.

ಸದರಿ ವಿಷಯದಲ್ಲಿ ಹೆಚ್ಚಿನ ವಿವರಗಳಿಗೆ ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಲು ಕೋರಿದೆ.

ಪಿ.ಆರ್. 63

ಕಾರ್ಯನಿರ್ವಾಹಕ ಇಂಜಿನಿಯರ್,
ಲೋ. ಇ. ವಿಭಾಗ, ಕೋಲಾರ.

**FORM - IV**
**(See Rule 12)**
**NOTICE**

It is hereby notified that the undersigned has changed his name from Sri **SHIVAPPA BASAPPA BHANGI** to **SHIVAPPA BASAPPA DESAI**

PD. 43 **SHIVAPPA BASAPPA DESAI**

**FORM - IV**
**(See Rule 12)**
**NOTICE**

It is hereby notified that the undersigned has changed his name from Sri. **ASHOK HANUMANTHAPPA BHAJANTRI** to **ASHOK HANUMANTHAPPA HOSAMANI**

PD. 44 **ASHOK HANUMANTHAPPA HOSAMANI**

**ಜಿಲ್ಲಾ ಶಸ್ತ್ರಚಿಕಿತ್ಸಕರ ಕಛೇರಿ, ಜಿಲ್ಲಾ ಆಸ್ಪತ್ರೆ ಬೀದರ್**

**ಟೆಂಡರ್ ಪ್ರಕಟಣೆ**

**ಸಂಖ್ಯೆ:ಜಿಆಬೀ/ಟೆಂಡರ್/ನಾನ್ ಕ್ಲಿನಿಕಲ್/ಸಿಆರ್-86/05-06, ದಿನಾಂಕ: 26ನೇ ಡಿಸೆಂಬರ್ 2005**

**ವಿಷಯ:** 2006-07ನೇ ಸಾಲಿಗೆ ಜಿಲ್ಲಾ ಆಸ್ಪತ್ರೆ ಬೀದರ್ ಇಲ್ಲಿಯ ಸ್ವಚ್ಛತ ವ್ಯವಸ್ಥೆಯ ಕಾರ್ಯ ನಿರ್ವಹಣೆಗೆ ಟೆಂಡರ್ ಅಹ್ವಾನಿಸಿರುವ ಬಗ್ಗೆ (ಸ್ವಚ್ಛತಾ ಸೇವೆಗಾಗಿ ನೇಮಿಸಬೇಕಾದ ಸಿಬ್ಬಂದಿಗಳ ಸಂಖ್ಯೆ 40).

**ಉಲ್ಲೇಖ:** 1. ಸರಕಾರಿ ಆದೇಶ ಸಂಖ್ಯೆ:ಆಕುಕ/368/ಸಿಜಿಎಂ/04/ಬೆಂಗಳೂರು, ದಿನಾಂಕ: 4.8.04.
2. ಮಾನ್ಯ ಜಿಲ್ಲಾಧಿಕಾರಿಗಳು ಬೀದರ್ ಇವರ ಟಿಪ್ಪಣಿ ಅನುಮೋದನೆಯ ದಿ:20.12.05.

ಬೀದರ್ ಜಿಲ್ಲಾ ಆಸ್ಪತ್ರೆ ಬೀದರ್ ಇಲ್ಲಿಯ ಸ್ವಚ್ಛತೆ ವ್ಯವಸ್ಥೆಯನ್ನು ಕೈಗೊಳ್ಳಲು 2006-07ನೇ ಸಾಲಿನ ಆರ್ಥಿಕ ವರ್ಷಕ್ಕೆ (ದಿ:1.4.06 ರಿಂದ 31.3.07)ರ ವರೆಗೆ ಅಥವಾ ಟೆಂಡರ್ ಅಂಗೀಕೃತವಾದ ದಿನಾಂಕದಿಂದ (ಯಾವುದು ನಂತರವೋ ಅದು ಅನ್ವಯಿಸುವುದು) ಒಂದು ವರ್ಷದ ಅವಧಿಗೆ ಕರ್ನಾಟಕ ಪಾರದರ್ಶಕ ಪ್ರೊಕ್ಯೂರ್‌ಮೆಂಟ್ ಆ್ಯಕ್ಟ್ ನಿಯಮಗಳನುಸಾರ ಟೆಂಡರ್ ಪ್ರಕ್ರಿಯೇ ನಡೆಸಲಾಗುವುದು. ಪ್ರಯುಕ್ತ ಸರ್ಕಾರದಿಂದ ಮಾನ್ಯತೆ ಪಡೆದ ಅನುಭವವುಳ್ಳ ಅರ್ಹ ಖಾಸಗಿ ಸಂಸ್ಥೆಗಳಿಂದ ಮೊಹರು ಮಾಡಿದ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಅರ್ಜಿ ನಮೂನೆಗಳನ್ನು ಷರತ್ತುಗಳು ಹಾಗೂ ನಿಬಂಧನೆಗಳು ಹೊಂದಿರುರ ಪತ್ರದೊಂದಿಗೆ ದಿನಾಂಕ:25.1.06 ರಿಂದ 15.2.06ರ ವರೆಗೆ ರಜಾ ದಿನಗಳನ್ನು ಹೊರತುಪಡಿಸಿ ಕಛೇರಿಯ ಕೆಲಸದ ವೇಳೆಯಲ್ಲಿ ನೀಡಲಾಗುತ್ತದೆ. ಟೆಂಡರ್ ನಮೂನೆಯ ಬೆಲೆ ರೂ.500-00 (ಐದು ನೂರು ಮಾತ್ರ) ಗಳನ್ನು ಮತ್ತು ಇದಕ್ಕೆ ಸಂಬಂಧಿಸಿದ ಮಾರಾಟ ತೆರಿಗೆ ಶೇ.5 ರಷ್ಟನ್ನು ಪಾವತಿಸಿ ಪಡೆಯಬಹುದಾಗಿದೆ. ನಿಬಂಧನೆಗಳಿಗುಣವಾಗಿ ಸೂಚಿಸಲಾದ ದಾಖಲೆಗಳೊಂದಿಗೆ ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಎರಡು ಲಕೋಟೆ ಪದ್ಧತಿಯಲ್ಲಿ) ದಿನಾಂಕ:22.2.06 ಮುಂಜಾನೆ 10.30 ಗಂಟೆಗೆ ತಲುಪುವಂತೆ ಅಂಚೆಯ ಮೂಲಕ, ಕೋರಿಯರ್ ಮೂಲಕ ಅಥವಾ ಖುದ್ದಾಗಿ ಸಲ್ಲಿಸಬಹುದು. ಟೆಂಡರ್ ಲಕೋಟೆಗಳನ್ನು ದಿನಾಂಕ:22.2.06 ಮುಂಜಾನೆ 11.30 ಗಂಟೆಗೆ ತೆರೆಯಲಾಗುವುದು.

**ಟೆಂಡರು ನಿಬಂಧನೆಗಳು**

1. ನಿಗದಿತ ದಿನಾಂಕ ಮತ್ತು ಸಮಯದ ನಂತರ ಬರುವ ಟೆಂಡರುಗಳನ್ನು ಸ್ವೀಕರಿಸುವುದಿಲ್ಲ.
2. ಮೊಹರಾದ ಎರಡು ಲಕೋಟೆಗಳ ಮೇಲೆ ದಪ್ಪ ಅಕ್ಷರದಲ್ಲಿ ಜಿಲ್ಲಾ ಆಸ್ಪತ್ರೆಯ ಸ್ವಚ್ಛತೆ ಕಾರ್ಯವನ್ನು ಕೈಗೊಳ್ಳಲು ಸಲ್ಲಿಸಿರುವ ಟೆಂಡರ್ ಎಂಬುದಾಗಿ ನಮೂದಿಸಬೇಕು.
3. ಕಡಿಮೆ ದರ ಸೂಚಿಸಿರುವ ಟೆಂಡರ್‌ನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಈ ಸಂಬಂಧ ರಚಿಸಿರುವ ಟೆಂಡರ್ ಕಮಿಟಿ ಹೊಂದಿರುತ್ತದೆ.
4. **ಒಂದನೆ ಕವರಿನಲ್ಲಿ ಈ ಕೆಳಗೆ ಸೂಚಿಸಿರುವ ದಾಖಲೆಗಳನ್ನು ಲಗತ್ತಿಸತಕ್ಕದ್ದು.**
   ಎ. ಟೆಂಡರ್ ಫಾರಂ ಖರೀದಿಸಿದ ಹಣ ಪಾವತಿ ರಶೀದಿಯ ಮೂಲ ಪ್ರತಿ.
   ಬಿ. ಇ.ಎಂ.ಡಿ. ಮೊತ್ತ ಪಾವತಿಗಾಗಿ ಜಿಲ್ಲಾ ಶಸ್ತ್ರ ಚಿಕಿತ್ಸಕರು ಜಿಲ್ಲಾ ಆಸ್ಪತ್ರೆ ಬೀದರ್ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಪಡೆದ ಡಿ.ಡಿ. ಮೂಲ ಪ್ರತಿ. ಈ ಮೊತ್ತವನ್ನು ನಗದು ರೂಪದಲ್ಲಿ ಅಥವಾ ಚೆಕ್ ರೂಪದಲ್ಲಿ ಸ್ವೀಕರಿಸಲಾಗುವುದಿಲ್ಲ.
   ಸಿ. ಟೆಂಡರುದಾರರು ಅವರ ಸಂಸ್ಥೆಯನ್ನು ಸಂಬಂಧಪಟ್ಟ ಇಲಾಖೆ, ಅಂದರೆ ಕಾರ್ಮಿಕ ಇಲಾಖೆಯಲ್ಲಿ ನೋಂದಣಿ ಮಾಡಿದ ನೋಂದಣಿ ಪತ್ರದ ದೃಡೀಕೃತ ಪ್ರತಿ.
   ಡಿ. ಇ.ಎಸ್.ಐ. ಮತ್ತು ಪ್ರಾವಿಡೆಂಟ್ ಫಂಡ್ ಇಲಾಖೆಯಿಂದ ಪಡೆದ ಪ್ರಮಾಣ ಪತ್ರ.
   ಇ. ಸಾಲ ತೀರಿಸುವ ಶಕ್ತಿಯ ಪ್ರಮಾಣ ಪತ್ರ (ಸಾಲ್‌ವೆನ್ಸಿ ಸರ್ಟಿಫಿಕೇಟ್)
   ಎಫ್ ಕರ್ನಾಟಕ ವೃತ್ತಿಗಳ ಕಸುಬುಗಳ ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲನಾ ತೆರಿಗೆ ಅಧಿನಿಯಮ 1976 ಪ್ರಮಾಣ ಪತ್ರ.
   ಜಿ. 2003-04ನೇ ಮತ್ತು 2004-05 ಆರ್ಥಿಕ ವರ್ಷದ 2005-06 ತೆರಿಗೆ ನಿರ್ಧರನಾ ವರ್ಷದ ಆದಾಯ ತೆರಿಗೆ ತೀರುವಳಿ ಪತ್ರ.
5. **ಎರಡನೇ ಕವರಿನಲ್ಲಿರಬೇಕಾದ ದಾಖಲೆ ಪತ್ರಗಳು:**
   ದಿನಾಂಕ:1.4.2006 ರಿಂದ 31.3.2007 ತನಕ ಜಿಲ್ಲಾ ಆಸ್ಪತ್ರೆ ಬೀದರ್ ಇಲ್ಲಿಯ ಸ್ವಚ್ಛತಾ ಮತ್ತು ನಿರ್ವಹಣೆ ತಗಲುವ ವಾರ್ಷಿಕ ಪಟ್ಟಿ

**ವಿ.ಸೂ:-** ಕರ್ನಾಟಕ ಪ್ರೊಕ್ಯೂರ್‌ಮೆಂಟ್ ಆಕ್ಟ್ 1999 ರಂತೆ ಪ್ರಥಮ ಕವರಿನಲ್ಲಿ ಮೇಲೆ ನಮೂದಿಸಿರುವ ಎಲ್ಲಾ ದಾಖಲೆ ಪತ್ರ ಲಭ್ಯವಿಲ್ಲದ ಪಕ್ಷದಲ್ಲಿ ಎರಡನೇ ಕವರನ್ನು ತೆರೆಯಲಾಗುವುದಿಲ್ಲ. ಹಾಗೂ ಟೆಂಡರನ್ನು ತಿರಸ್ಕರಿಸಲಾಗುವುದಿಲ್ಲ ಹಾಗೂ ಟೆಂಡರನ್ನು ತಿರಸ್ಕರಿಸಲಾಗುವುದು.

6. **ಸಲ್ಲಿಸಬೇಕಾಗಿರುವ ಇ.ಎಂ.ಡಿ. ಮತ್ತು ಸೆಕ್ಯೂರಿಟಿ ಡಿಪಾಸಿಟ್‌ಗಳ ವಿವರ:**
   (ಎ) 1) ಟೆಂಡರಿನಲ್ಲಿ ನಮೂದಿಸಿರುವ ವಾರ್ಷಿಕ ಮೊತ್ತಕ್ಕೆ ಶೇ.20 ರಷ್ಟು ಇ.ಎಂ.ಡಿ. ಹಣವನ್ನು ಜಿಲ್ಲಾ ಶಸ್ತ್ರ ಚಿಕಿತ್ಸಕರು ಜಿಲ್ಲಾ ಆಸ್ಪತ್ರೆ ಬೀದರ್, ಇವರ ಹೆಸರಿಗೆ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿ.ಡಿ.

2) ಸೆಕ್ಯೂರಿಟಿ ಡಿಪಾಸಿಟ್ ಅಂಗೀಕೃತ ಟೆಂಡರ್ ಮೊಬಲಗಿನ ಸೇ. 10 ರಷ್ಟು.

ಬಿ) ಟೆಂಡರ್ ಅಂಗೀಕೃತವಾದ ಟೆಂಡರ್‌ದಾರರು ಟೆಂಡರ್ ಅಂಗೀಕೃತವಾದ ಬಗ್ಗೆ ಪತ್ರ ಸ್ವೀಕೃತವಾದ 7 ದಿನಗಳ ಒಳಗಾಗಿ ಭದ್ರತಾ ಠೇವಣಿಯನ್ನು ಜಿಲ್ಲಾ ಶಸ್ತ್ರ ಚಿಕಿತ್ಸಕರು ಜಿಲ್ಲಾ ಆಸ್ಪತ್ರೆ ಬೀದರ್ ಇವರಿಗೆ ಭದ್ರತಾ ಠೇವಣಿಗಾಗಿ ಒತ್ತೆ ಇಟ್ಟಿರುವುದಾಗಿ ಸಂಬಂಧಪಟ್ಟ ಬ್ಯಾಂಕ್, ಅಂಚೆ ಕಛೇರಿಯಿಂದ ದೃಢೀಕರಿಸಲ್ಪಟ್ಟ ತಮ್ಮ ಸಂಸ್ಥೆಯ ಹೆಸರಿನಲ್ಲಿ ಪಡೆದ ಕರಾರು ಪತ್ರದೊಂದಿಗೆ ಸಲ್ಲಿಸತಕ್ಕದ್ದು.

7. (ಎ) ಗುತ್ತಿಗೆ ಪಡೆಯಲು ಅನರ್ಹರಾದ ಟೆಂಡರುದಾರರ ಇ.ಎಂ.ಡಿ. ಮೊತ್ತವನ್ನು ದರ ಗುತ್ತಿಗೆ ನಿಗದಿಪಡಿಸಿದ ನಂತರ ಹಿಂತಿರುಗಿಸಲಾಗುವುದು.

ಬಿ) ಟೆಂಡರ್ ಅಂಗೀಕೃತವಾದ ಟೆಂಡರುದಾರರ ಇ.ಎಂ.ಡಿ. ಮೊಬಲಗನ್ನು ಭದ್ರತಾ ಠೇವಣಿ ಮತ್ತು ಒಪ್ಪಂದದ ಕರಾರು ಪತ್ರವನ್ನು ಹಾಜರುಪಡಿಸಿದ ನಂತರ ಹಿಂತಿರುಗಿಸಲಾಗುವುದು.

ಸಿ) ಗುತ್ತಿಗೆ ಪಡೆಯಲು ಅರ್ಹವಾದ ಟೆಂಡರುದಾರರ ಭದ್ರತಾ ಠೇವಣಿ ಮೊತ್ತವನ್ನು ತೃಪ್ತಿಕರವಾದ ಕಾರ್ಯನಿರ್ವಹಿಸಿದ ದರ ಗುತ್ತಿಗೆಯ ಅವಧಿ ಪೂರ್ಣಗೊಂಡ ತಿಂಗಳ ನಂತರ ಮೂರು ವರ್ಷದ ಒಳಗೆ ಕೋರಿಕೆ ಪತ್ರ ಸಲ್ಲಿಸತಕ್ಕದ್ದು.

ಡಿ) ಈ ಟೆಂಡರಿನ ಠೇವಣಿ ಮೊತ್ತವನ್ನು ಟೆಂಡರುದಾರರು ಈ ಆಸ್ಪತ್ರೆಯಿಂದಾಗಲಿ, ಆರೋಗ್ಯ ಇಲಾಖೆಯಿಂದಾಗಲಿ ಬರಬಹುದಾದ ಯಾವುದೇ ಬಾಕಿ ಪಾವತಿ ತಗಾದೆ ಸರಿಹೊಂದಿಸಲು ಅವಕಾಶವಿರುವುದಿಲ್ಲ.

ಇ) ಟೆಂಡರ್ ಅಂಗೀಕೃತವಾದ ಕೂಡಲೇ ಸಂಬಂಧಪಟ್ಟ ಸಂಸ್ಥೆಗೆ ಲಿಖಿತ ಮೂಲಕ ತಿಳಿಸಲಾಗುವುದು. ಹಾಗೂ ಅವರು ತಕ್ಷಣ ಅಂದರೆ 7 ದಿನಗಳೊಳಗೆ ಗುತ್ತಿಗೆ ಒಪ್ಪಂದದ ಕರಾರು ಪತ್ರವನ್ನು ಟೆಂಡರ್ ಮೊತ್ತದ 10 ಶೇಕಡಾ ಭದ್ರತಾ ಠೇವಣಿಯೊಂದಿಗೆ ಸಲ್ಲಿಸಬೇಕು. ಹಾಗೂ ಈ ಒಪ್ಪಂದದ ಕರಾರು ಪತ್ರ ಅಂಗೀಕೃತವಾಗಿದೆ ಎಂದು ಸ್ವೀಕರಿಸಿದ 15 ದಿನಗಳೊಳಗಾಗಿ ಸ್ವಚ್ಛತಾ ಕಾರ್ಯವನ್ನು ಪೂರ್ಣ ಪ್ರಮಾಣದಲ್ಲಿ ಪ್ರಾರಂಭಿಸತಕ್ಕದ್ದು. ನಿಗದಿತ ಅವಧಿಯೊಳಗೆ ಸ್ವಚ್ಛತೆ ಕಾರ್ಯವನ್ನು ಪ್ರಾರಂಭಿಸದಿದ್ದ ಪಕ್ಷದಲ್ಲಿ ವಿಳಂಬವಾದ ಪ್ರತಿ ವಾರಕ್ಕೆ ರೂ.500-00 ರಂತೆ ಕರಾರು ಪತ್ರ ಅಂಗೀಕೃತವಾದ ದಿನಾಂಕದಿಂದ ಲೆಕ್ಕ ಹಾಕಿ ದಂಡ ವಿಧಿಸಲಾಗುವುದು.

ಎಫ್) ಗುತ್ತಿಗೆ ಅವಧಿ ಮುಗಿಯುವವರೆಗೂ ಗುತ್ತಿಗೆದಾರರು ಗುತ್ತಿಗೆಯನ್ನು ಬೇರೆಯವರಿಗೆ ವರ್ಗಾಯಿಸುವಂತಿಲ್ಲ. ಅನಿವಾರ್ಯ ಕಾರಣಗಳಿಂದ ಟೆಂಡರ್ ಅನುಮೋದನಾ ಪ್ರಾಧಿಕಾರವು ಸೂಚಿಸಿದಲ್ಲಿ ಟೆಂಡರ್ ಅವಧಿ ಮುಗಿದ ನಂತರ ಮುಂದಿನ 2 ತಿಂಗಳ ಅವಧಿಗೆ ಹಾಲಿ ಟೆಂಡರನ್ನು ನಮೂದಿಸಿದ ದರದಲ್ಲಿಯೇ ಸ್ವಚ್ಛತಾ ಮತ್ತು ಕಾರ್ಯವನ್ನು ನಿರ್ವಹಿಸಲು ಟೆಂಡರುದಾರರು ಸಿದ್ಧರಿರಬೇಕು.

ಜಿ) ಕಾನೂನು ವ್ಯಾಪ್ತಿ ಬೀದರ್ ನಗರದ ವ್ಯಾಪ್ತಿಗೊಳಪಟ್ಟಿರುತ್ತದೆ.

ಹೆಚ್) ಟೆಂಡರುಗಳನ್ನು ದಿನಾಂಕ: 22.2.06 ರಂದು ಪೂರ್ವಾಹ್ನ 11.30 ಗಂಟೆಗೆ ತೆರೆಯಲಾಗುವುದು.

ಐ) ಟೆಂಡರ್‌ನ ಮಾಸಿಕ ಮತ್ತು ವಾರ್ಷಿಕ ಮೊತ್ತವನ್ನು ಟೆಂಡರ್ ಫಾರಂನಲ್ಲಿ ಅಂಕೆಯಲ್ಲಿ ಹಾಗೂ ಅಕ್ಷರದಲ್ಲಿ, ಒಂದೇ ಒಂದು ತಪ್ಪಿಲ್ಲವಂತೆ ಸ್ಪಷ್ಟವಾಗಿ ನಮೂದಿಸಬೇಕು.

ಜೆ) ಟೆಂಡರುದಾರರು ಟೆಂಡರು ನಿಬಂಧನೆಗಳ ಪ್ರಕಾರ ಕ್ರಮ ಕೈಗೊಳ್ಳದಿದ್ದಲ್ಲಿ ಅವರನ್ನು ಡಿಫಾಲ್ಟರ್ ಆಗಿ ಡಿಕ್ಲೇರ್ ಮಾಡಲಾಗುವುದು ಹಾಗೂ ಮುಂದಿನ ಮೂರು ವರ್ಷಗಳಲ್ಲಿ ಟೆಂಡರುಗಳಲ್ಲಿ ಭಾಗವಹಿಸಲು ಅನರ್ಹರಾಗುವರು.

ಕೆ) ಟೆಂಡರುಗಳಲ್ಲಿ ಮೊತ್ತವನ್ನು ತಿದ್ದಬಾರದು, ತಪ್ಪಾಗಿದ್ದಲ್ಲಿ ಅದನ್ನು ಹೊಡೆದು ಹಾಕಿ, ಪಕ್ಕದಲ್ಲಿ ಸರಿಯಾದ ಮೊತ್ತವನ್ನು ಬರೆದು ಸಹಿ ಮಾಡಬೇಕು. ತಪ್ಪಿದಲ್ಲಿ ಟೆಂಡರನ್ನು ತಿರಸ್ಕರಿಸಲಾಗುವುದು. ಮೊತ್ತವನ್ನು ಅಕ್ಷರದಲ್ಲಿ ಸಹ ಬರೆಯಬೇಕು.

ಎಲ್) ಟೆಂಡರನ್ನು ಅಂಗೀಕರಿಸುವ ಅಥವಾ ಯಾವುದೇ ಕಾರಣವನ್ನು ಕೊಡದೆ ತಿರಸ್ಕರಿಸುವ ಹಕ್ಕನ್ನು ಆಸ್ಪತ್ರೆಯ ಟೆಂಡರ್ ಕಮಿಟಿ ಹೊಂದಿರುತ್ತದೆ.

(8) ಟೆಂಡರು ಅಂಗೀಕೃತವಾದ ಬಗ್ಗೆ ಪತ್ರ ಸ್ವೀಕೃತವಾದ 7 ದಿನಗಳೊಳಗೆ ಒಪ್ಪಂದದ ಮತ್ತು ಷರತ್ತುಗಳನ್ನು ಪೂರೈಸದಿದ್ದಲ್ಲಿ (ಅಂದರೆ ಠೇವಣಿ ಕಟ್ಟುವುದು, ಕರಾರು ಪತ್ರ ಮಾಡುವುದು) ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು ಹಾಗೂ ಡಿಫಾಲ್ಟರ್ ಎಂದು ಪರಿಗಣಿಸಲಾಗುವುದು.

(9) ಒಪ್ಪಂದ ಮಾಡಿಕೊಂಡ ನಂತರ ನಿಗದಿತ ಒಪ್ಪಂದದ ಪ್ರಕಾರ ಸಂಪೂರ್ಣ ಪ್ರಮಾಣದಲ್ಲಿ ಸ್ವಚ್ಛತಾ ಕಾರ್ಯವನ್ನು ಪ್ರಾರಂಭಿಸದಿದ್ದಲ್ಲಿ, ಅಂತಹ ಸಂಸ್ಥೆಯ ಇ.ಎಂ.ಡಿ. ಮತ್ತು ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಲಾಗುವುದು ಅಲ್ಲದೆ ಸ್ವಚ್ಛತಾ ಕಾರ್ಯ ತೃಪ್ತಿಕರವಾಗಿರದಿದ್ದಲ್ಲಿ, ಒಂದು ತಿಂಗಳ ನೋಟೀಸು ನೀಡುವುದರ ಮೂಲಕ ಗುತ್ತಿಗೆಯನ್ನು ಸಮಾಪ್ತಿಗೊಳಿಸಲು ಟೆಂಡರ್ ಕಮಿಟಿ ಅಧಿಕಾರಿ ಹೊಂದಿರುತ್ತದೆ.

(10) ಪ್ರತೀ ತಿಂಗಳ 5ನೇ ತಾರೀಖಿನ ಒಳಗೆ ಗುತ್ತಿಗೆದಾರರು, ಹಿಂದಿನ ತಿಂಗಳ ಬಿಲ್ಲನ್ನು ತಯಾರಿಸಿ ಪಾವತಿಗಾಗಿ ಸಲ್ಲಿಸತಕ್ಕದ್ದು.

(11) ಟೆಂಡರ್ ಅಂಗೀಕೃತವಾದ ಮೇಲೆ ಟೆಂಡರ್ ಕಾರ್ಯವನ್ನು ಯಾವುದೇ ಕಾರಣಕ್ಕೂ ನಿಲ್ಲಿಸುವಂತಿಲ್ಲ. ತಪ್ಪಿದಲ್ಲಿ, ಭದ್ರತಾ ಠೇವಣಿಯಾಗಿ ಇಟ್ಟ ಹಣವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು. ಮರು ಟೆಂಡರ್‌ನಿಂದ ಸರ್ಕಾರಕ್ಕೆ ನಷ್ಟ ಆದಲ್ಲಿ ಸದರಿ ನಷ್ಟಕ್ಕೆ ಗುತ್ತಿಗೆದಾರರನ್ನೆ ಜವಾಬ್ದಾರರನ್ನಾಗಿ ಮಾಡಲಾಗುವುದು.

(12) ಅಂಗೀಕೃತ ದರಕ್ಕಿಂತ ಹೆಚ್ಚುವರಿ ದರಕ್ಕೆ ಗುತ್ತಿಗೆದಾರರಿಂದ ಯಾವ ಮನವಿ ಪತ್ರವನ್ನು ಸ್ವೀಕರಿಸಲಾಗುವುದಿಲ್ಲ.

(13) ಗುತ್ತಿಗೆ ಅವಧಿಯಲ್ಲಿ ಯಾವ ಮುಂಗಡವನ್ನು ಮಂಜೂರು ಮಾಡಲಾಗುವುದಿಲ್ಲ.

(14) ಟೆಂಡರುದಾರರು ಈ ಹಿಂದೆ ಯಾವುದೇ ಆಸ್ಪತ್ರೆಯ ಸ್ವಚ್ಚತೆ ಕಾರ್ಯದ ಗುತ್ತಿಗೆ ಹೊಂದಿದ ಪಕ್ಷದಲ್ಲಿ ಕಾರ್ಯನಿರ್ವಹಣೆಯ ಬಗ್ಗೆ ಆಯಾ ಸಂಸ್ಥೆಯವರು ಆಸ್ಪತ್ರೆಯಿಂದ ಪಡೆದ ಸರ್ಟಿಫಿಕೇಟ್‌ನ್ನು ಟೆಂಡರು ಜೊತೆ ತಪ್ಪದೇ ಲಗತ್ತಿಸತಕ್ಕದ್ದು.

(15) ಟೆಂಡರುದಾರರು ಪ್ರತಿಯೊಬ್ಬ ಸ್ವಚ್ಛತಾ ಕೆಲಸಗಾರರಿಗೆ ಕಡು ಹಸಿರು ಬಣ್ಣದ ಸಮವಸ್ತ್ರವನ್ನು ಸರಬರಾಜು ಮಾಡತಕ್ಕದ್ದು. ಎರಡು ಜೊತೆ ಬಟ್ಟೆ ಹಾಗೂ ಅವರಿಗೆ ಅವರವರ ಹೆಸರಿಗೆ ಗುರುತು ಚೀಟಿಗಳನ್ನು ಸರಬರಾಜು ಮಾಡಿ ಕೆಲಸಕ್ಕೆ ಬರುವ ಮೊದಲನೇ ದಿನದಿಂದಲೇ ಧರಿಸುವಂತೆ ನೋಡಿಕೊಳ್ಳತಕ್ಕದ್ದು.

(16) ಎ) ಸ್ವಚ್ಛತೆ ಕಾರ್ಯ ನಿರ್ವಹಿಸುವಾಗ ಕೆಲಸಗಾರರಿಗೆ ಯಾವುದೇ ಅಪಘಾತ, ತೊಂದರೆ ಉಂಟಾದಲ್ಲಿ ವರ್ಕ್ಸ್ ಮೇನ್ಸ್ ಕಂಪನ್ಸೇಷನ್ ನಿಯಮ 1923ರ ಪ್ರಕಾರ ಅವರಿಗೆ ಸಂದಾಯ ಮಾಡಬೇಕಾದ ಪರಿಹಾರಕ್ಕೆ ಸಂಬಂಧಪಟ್ಟ ಟೆಂಡರುದಾರರೇ ಹೊಣೆಗಾರರಾಗಿರುತ್ತಾರೆ.

ಬಿ) ಕೆಲಸಗಾರರಿಗೆ ಸಂಬಂಧಪಟ್ಟಂತೆ ಇ.ಎಫ್.ಐ. ಮತ್ತು ಪ್ರಾವಿಡೆಂಟ್ ಫಂಡ್ ನಿಯಮಗಳು ಪಾಲಿಸುವುದರ ಗುತ್ತಿಗೆದಾರರು ಹೊಣೆಯಾಗಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ, ಸಂಬಂಧಪಟ್ಟ ಸರ್ಕಾರಿ ಇಲಾಖೆಗಳಿಂದ ನೋಟೀಸು ಬಂದಲ್ಲಿ ಗುತ್ತಿಗೆದಾರರೇ ಇದಕ್ಕೆ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ. ಗುತ್ತಿಗೆ ಪ್ರಾರಂಭವಾದ ನಂತರ ಮೊದಲನೇ ತಿಂಗಳ ಬಿಲ್ಲು ಪಾವತಿಸುವ ಮೊದಲು ತಮ್ಮ ಕೈಕೆಳಗೆ ದುಡಿಯುವ ಕಾರ್ಮಿಕರಿಗೆ ಪ್ರಾವಿಡೆಂಟ್ ಫಂಡ್ ಇಲಾಖೆಯಲ್ಲಿ ನೋಂದಾವಣಿ ಮಾಡಿದ ತಃಖ್ತೆ ಹಾಗೂ ಗುತ್ತಿಗೆ ನೋಂದಣಿ ಪ್ರಮಾಣ ಪತ್ರವನ್ನು ಈ ಕಚೇರಿಗೆ ಒಪ್ಪಿಸತಕ್ಕದ್ದು.

ಸಿ) ಕಾರ್ಮಿಕ ಇಲಾಖೆಯ ಸರ್ಕಾರಿ ನೋಟೀಫಿಕೇಶನ್ ಸಂಖ್ಯೆ:ಕೆಇಇ:24 ಎಲ್.ಎಂ.ಡಬ್ಲ್ಯೂ 2001, ದಿನಾಂಕ:15.11.2002ರಲ್ಲಿ ನಿಗದಿಪಡಿಸಿದ ಕನಿಷ್ಠ ವೇತನ ಭತ್ಯೆಗಳನ್ನು ಗುತ್ತಿಗೆದಾರರು ಅವರ ನೌಕರಿಗೆ ಪಾವತಿಸಬೇಕು. ಈ ಬಗ್ಗೆ ಸೂಕ್ತ ದೃಢೀಕರಣ ನೀಡಬೇಕು. ಈ ಬಗ್ಗೆ ಕಾರ್ಮಿಕ ಇಲಾಖೆಯಿಂದ ಯಾವುದೇ ದೂರುಗಳು ಮತ್ತು ಆಕ್ಷೇಪಣೆಗಳು ಬಂದಲ್ಲಿ ಗುತ್ತಿಗೆದಾರರೇ ಹೊಣೆಗಾರರು ಹಾಗೂ ಕಾರ್ಮಿಕ ಇಲಾಖೆಯಿಂದ ಈ ಬಗ್ಗೆ ಯಾವುದೇ ನೋಟೀಸು ಜಾರಿಯಾದಲ್ಲಿ, ಗುತ್ತಿಗೆದಾರರು ಉತ್ತರಿಸಬೇಕಾಗಿರುತ್ತದೆ. ಅಂತೆಯೇ ನೌಕರರಿಗೆ ಕಾರ್ಮಿಕ ಇಲಾಖೆಯು ಮೇಲ್ಕಾಣಿಸಿದ ನೋಟೀಫಿಕೇಶನ್‌ನಲ್ಲಿ ನಿಗದಿಪಡಿಸಿದಂತೆ ಮಾಸಿಕ ವೇತನ ಪಾವತಿಸಿ ಸಂಬಂಧಪಟ್ಟ ದಾಖಲೆಗಳನ್ನು ಇಟ್ಟುಕೊಂಡು ಮುಂದಿನ ತಿಂಗಳ ಬಿಲ್ಲು ಪಾವತಿಸುವ ಮೊದಲು ಶುಶ್ರೂಷಾಧಿಕ್ಷಕಿಯವರ ಮತ್ತು ನಿವಾಸಿ ವೈದ್ಯಾಧಿಕಾರಿಗಳ ಷರಾದೊಂದಿಗೆ, ಜಿಲ್ಲಾ ಶಸ್ತ್ರ ಚಿಕಿತ್ಸಕರ ಮಾಹಿತಿ ಒಪ್ಪಿಸತಕ್ಕದ್ದು ಹಾಗೂ ಕಾರ್ಮಿಕರಿಗೆ ನಿಯಮಾವಳಿಯಂತೇ ಸಿಗಬೇಕಾದ ಎಲ್ಲಾ ಸವಲತ್ತುಗಳನ್ನು ನೀಡಬೇಕು.

ಡಿ) ಟೆಂಡರುದಾರರು ಆದಾಯ ತೆರಿಗೆ ಪಾವತಿದಾರರಾಗಿರಬೇಕು.

ಇ) ಟೆಂಡರ್ ಅಂಗೀಕರಿಸಲ್ಪಟ್ಟ ಗುತ್ತಿಗೆದಾರರು ಅಂಗೀಕೃತ ಟೆಂಡರ್ ಮೊತ್ತದ ಶೇ.10 ರಷ್ಟು ಭದ್ರತಾ ಠೇವಣಿಯಾಗಿ ಜಿಲ್ಲಾ ಶಸ್ತ್ರ ಚಿಕಿತ್ಸಕರು ಜಿಲ್ಲಾ ಆಸ್ಪತ್ರೆ ಬೀದರ್ ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ.ಯನ್ನು ಕಛೇರಿಗೆ ಸಲ್ಲಿಸುವುದು.

ಎಫ್) ಟೆಂಡರುದಾರರು 400 ಹಾಸಿಗೆಯ ಆಸ್ಪತ್ರೆಯಲ್ಲಿ ಎಲ್ಲಾ ವಿಭಾಗಗಳಲ್ಲಿ ನೈರ್ಮಲ್ಯ ಕೆಲಸಗಳನ್ನು ತೃಪ್ತಿಕರವಾಗಿ ನಿರ್ವಹಿಸಲು ಬೇಕಾದಷ್ಟು ಸಂಖ್ಯೆಯ ಸ್ವಚ್ಛತಾ ಸಿಬ್ಬಂದಿಗಳನ್ನು ನೇಮಿಸಿಕೊಳ್ಳಲು ನಿರ್ಧರಿಸಿರುವ ನೈರ್ಮಲ್ಯ ಸೇವಕರ ಸಂಖ್ಯೆಯನ್ನು ಟೆಂಡರಿನಲ್ಲಿ ಸ್ಪಷ್ಟವಾಗಿ ನಮೂದಿಸಬೇಕು. ಜಿಲ್ಲಾ ಶಸ್ತ್ರ ಚಿಕಿತ್ಸಕರು ಬೀದರ್ ಇವರ ನಿರ್ದೇಶನದಂತೆ ಕಾರ್ಯ ಪ್ರವೃತ್ತರಾಗುವುದು.

(17) ಟೆಂಡರುದಾರರು ನಿಯೋಜಿಸಿಕೊಂಡಿರುವ ಕೆಲಸಗಾರರಿಗೆ ಕನಿಷ್ಠ 18 ವರ್ಷದವರಾಗಿರಬೇಕು ಹಾಗೂ ದೃಡಕಾಯರಾಗಿರಬೇಕು.

(18) ಟೆಂಡರುದಾರರು ನಿಯೋಜಿಸಿಕೊಳ್ಳುವ ಕೆಲಸಗಾರರು ಹಾಗೂ ಮೇಲ್ವಿಚಾರಕರು ಈ ಆಸ್ಪತ್ರೆಯ ಶುಶ್ರೂಷಾಧೀಕ್ಷಕರ ಮತ್ತು ಉನ್ನತಾಧಿಕಾರಿಗಳ ಆದೇಶದ ಮೇರೆಗೆ ಸ್ವಚ್ಛತೆ ಕಾರ್ಯವನ್ನು ನಿರ್ವಹಿಸಬೇಕು.

(19) ಆಸ್ಪತ್ರೆಯ ಎಲ್ಲಾ ವಾರ್ಡುಗಳು, ವರಂಡಾ, ವಿವಿಧ ವೈದ್ಯಕೀಯ ವಿಭಾಗಗಳು, ಸ್ನಾನದ ಕೊಠಡಿ, ಶೌಚಾಲಯಗಳು, ಶವಾಗಾರ ಕೊಠಡಿ, ಹೊರರೋಗಿ ವಿಭಾಗ, ಒಳ ರೋಗಿ ವಿಭಾಗ, ಇನ್ನಿತರೆ ವಿಭಾಗಗಳಲ್ಲಿ ದಿನಕ್ಕೆ 3 ಬಾರಿ ಕಸಗೂಡಿಸಿ ಒರೆಸಿ ಸ್ವಚ್ಛಗೊಳಿಸಿಬೇಕು. ಅಂದರೆ, (ಬೆಳ್ಳಿಗೆ 8.00 ಗಂಟೆ, ಮಧ್ಯಾಹ್ನ 1.00 ಗಂಟೆ, ಸಂಜೆ 7.00 ಗಂಟೆಯ) ಒಳಗೆ ಮುಗಿಸಬೇಕು.

- ಆಸ್ಪತ್ರೆಯ ಆವರಣದ ಒಳಗೆ ಬರುವ ರಸ್ತೆಗಳನ್ನು ಕನಿಷ್ಠ ಮೂರು ಬಾರಿ ಶುಚಿಗೊಳಿಸಬೇಕು.
- ಆಸ್ಪತ್ರೆಯ ಆವರಣದಲ್ಲಿ ಅನಾವಶ್ಯಕವಾಗಿ ಬೆಳೆದಿರುವ ಪಾರ್ಥಿನಿಯಂ ಹಾಗೂ ಇತರೆ ಅನುಪಯೋಗಿ ಗಿಡಗಳನ್ನು ಕಿತ್ತು ಆವರಣವನ್ನು ಶುಚಿಯಾಗಿಡುವುದು.
- ಆಸ್ಪತ್ರೆಯ ತ್ಯಾಜ್ಯ ವಸ್ತುಗಳನ್ನು ಮತ್ತು ಕಸಕಡ್ಡಿಗಳನ್ನು ಪ್ರತಿ ದಿನ ವಿಲೇವಾರಿ ಮಾಡುವುದು.
- ಆಸ್ಪತ್ರೆಯಲ್ಲಿ 15 ದಿನಕ್ಕೊಮ್ಮೆ ಎಲ್ಲಾ ವಿಭಾಗಗಳಲ್ಲಿ ಚೇಡರ್ ಒಲೆಗಳನ್ನು ತೆಗೆದು ಸ್ವಚ್ಛಗೊಳಿಸುವುದು.
- ಸಾರ್ವಜನಿಕರಿಗೆ ನೀರಿನ ವ್ಯವಸ್ಥೆ ಇರುವ ಸ್ಥಳಗಳನ್ನು ಪ್ರತಿ ದಿನ ಶುಚಿ ಮಾಡುವುದು. ಆಸ್ಪತ್ರೆಯಲ್ಲಿ ನೀರಿನ ಬೇಸಿನ್‌ಗಳನ್ನು ತೊಳೆಯುವುದು.
- ಆಸ್ಪತ್ರೆಯ ಇತರೆ ವಾರ್ಡಗಳನ್ನು ತಿಂಗಳಲ್ಲಿ 4 ಬಾರಿ ನೀರಿನಿಂದ ತೊಳೆಯುವುದು.
- ಆಸ್ಪತ್ರೆಯ ಕಿಟಕಿ, ಬಾಗಿಲುಗಳನ್ನು ಪ್ರತಿ ನಿತ್ಯ ಸ್ವಚ್ಛ ಮಾಡತಕ್ಕದ್ದು ಮತ್ತು ತಿಂಗಳಲ್ಲಿ ಒಂದು ಬಾರಿ ಎಲ್ಲಾ ಕಿಟಕಿ ಬಾಗಿಲಿನ ಲೋಹಗಳಿಗೆ ಆಯಿಲ್ ಹಾಕತಕ್ಕದ್ದು.
- ಆಸ್ಪತ್ರೆಯ ಫ್ಯಾನ್ ರೆಕ್ಕೆಗಳನ್ನು ತಿಂಗಳಲ್ಲಿ ಎರಡು ಬಾರಿ ಶುಚಿ ಮಾಡತಕ್ಕದ್ದು.

20. ಆಸ್ಪತ್ರೆಯಲ್ಲಿ ಕೆಟ್ಟುಹೋದ ಬಲ್ಬ್ ಬದಲಿಗೆ ಹೊಸ ಬಲ್ಬ ಹಾಕುವುದು ಮತ್ತು ಸಣ್ಣ ಪುಟ್ಟ ವಿದ್ಯುತ್ ರಿಪೇರಿಗಳನ್ನು ಮಾಡುವುದು ಮತ್ತು ಫ್ಯಾನ್ ರಿಪೇರಿ, ನೀರಿನ ಪಂಪ್ ರಿಪೇರಿ.

21. ಆಸ್ಪತ್ರೆ ಆವರಣದಲ್ಲಿ ತೋಟಗಾರಿಕೆ ಇಲಾಖೆಯ ಸಹಕಾರದಿಂದ ಉದ್ಯಾನವನವನ್ನು ಸ್ಥಾಪಿಸಿ ಅದರ ಉಸ್ತುವಾರಿಯನ್ನು ನೋಡಿಕೊಳ್ಳತಕ್ಕದ್ದು.

22. ಆಸ್ಪತ್ರೆಯಲ್ಲಿ ಪ್ರತಿ ವರ್ಷ, ಮಂಚ ಮತ್ತು ಲಾಕರ ಇತರೆ ವಸ್ತುಗಳಿಗೆ ಬಣ್ಣ ಹಚ್ಚುವುದು ಮತ್ತು ಬುಷ್‌ಗಳು ಹಾಳಾಗಿದ್ದಲ್ಲಿ ಹೊಸ ಬುಷಗಳನ್ನು ಅಳವಡಿಸುವುದು.

23. ಆಸ್ಪತ್ರೆಯಲ್ಲಿ ಲೀನೇನ್ ಖರೀದಿಸಿ ಸಂಬಂಧಪಟ್ಟ ಗುತ್ತಿಗೆದಾರನಿಗೆ ನೀಡುವುದು. ರೋಗಿಗಳಿಗೆ ಪ್ರತಿ ದಿನ ಸ್ವಚ್ಛಗೊಳಿಸಿದ ಬೆಡ್‌ಶೀಟ್, ಉಡುಪಿ ಮತ್ತು ಇತರೆ ವಿಭಾಗಗಳ ಬಟ್ಟೆಗಳನ್ನು ಬದಲಾಯಿಸುವುದರ ಮತ್ತು ಇವುಗಳ ನಿರ್ವಹಣೆಯನ್ನು ಸಹ ಮಾಡತಕ್ಕದ್ದು. ಒಂದು ವರ್ಷ ಗುತ್ತಿಗೆ ಅವಧಿ ಮುಗಿದ ನಂತರ ಮೊದಲ ನೀಡಿದ ಲಿನೇನ್‌ಗಳನ್ನು ಗುತ್ತಿಗೆದಾರನು ಹೊಸದಾಗಿ ಖರೀದಿಸಿಕೊಡತಕ್ಕದ್ದು.

24. ಸ್ಯಾನಿಟರಿ ಪೈಪುಗಳು ಕೆಟ್ಟಿಕೊಂಡರೆ ಅವುಗಳನ್ನು ಸರಿಪಡಿಸುವುದು ಮತ್ತು ದುರಸ್ತಿ ಮಾಡುವುದು.

25. ಆಸ್ಪತ್ರೆಯಲ್ಲಿ ಉಪಯೋಗಿಸುವ ಬಟ್ಟೆಗಳನ್ನು ಸ್ವಚ್ಛಗೊಳಿಸುವುದು.
26. ಆಸ್ಪತ್ರೆಯ ಗೋಡೆಗಳ ಮೇಲೆ ಸಾರ್ವಜನಿಕರು ಪ್ರಚಾರ ಚೀಟಿಗಳನ್ನು ಅಂಟಿಸದಂತೆ ನೋಡಿಕೊಳ್ಳುವುದು.
27. ಆಸ್ಪತ್ರೆಯಲ್ಲಿ ನೀರಿನ ಸರಬರಾಜು, ನಿರ್ವಹಣೆ ಮತ್ತು ನಲ್ಲಿ ರಿಪೇರಿ ಅವಶ್ಯಕತೆ ಇದ್ದಲ್ಲಿ ಹೊಸ ನಲ್ಲಿಗಳನ್ನು ಅಳವಡಿಸುವುದು.
28. ಆಸ್ಪತ್ರೆಯಲ್ಲಿ ಅಗ್ನಿ ಶಾಮಕ ವಸ್ತುಗಳನ್ನು ಅವಶ್ಯಕತೆ ಇದ್ದ ಕಡೆ ಇಡುವುದು.
29. ಟೆಂಡರು ಅಂಗೀಕೃತವಾದ ಟೆಂಡರುದಾರರು, ಅವರು ನೇಮಿಸಿಕೊಳ್ಳುವ ಸಿಬ್ಬಂದಿಯ ಮನೆ ವಿಳಾಸಗಳನ್ನೊಳಗೊಂಡ ಪೂರ್ಣ ಮಾಹಿತಿಯನ್ನು ಈ ಕಛೇರಿಗೆ, ಟೆಂಡರ್ ಸ್ವೀಕೃತವಾದ ಕೂಡಲೇ ಒದಗಿಸತಕ್ಕದ್ದು.
30. ಆಸ್ಪತ್ರೆಯ ಸೊತ್ತುಗಳನ್ನು ಯಾರಾದರೂ ಕೊಂಡೊಯ್ಯುವುದು ಪತ್ತೆಯಾದಲ್ಲಿ ಅಂತಹವರನ್ನು ಕರ್ತವ್ಯ ನಿರತ ವೈದ್ಯಾಧಿಕಾರಿಯವರ ಅಥವಾ ನಿವಾಸಿ ವೈದ್ಯಾಧಿಕಾರಿಯವರ ಮುಂದೆ ಹಾಜರುಪಡಿಸಬೇಕು.
31. ಗುತ್ತಿಗೆದಾರರ, ಸಂಸ್ಥೆಯ ಮತ್ತು ಅವರ ನೌಕರರ ಮಧ್ಯೆ ಉದ್ಭವಿಸಬಹುದಾದ ಯಾವುದೇ ವಿವಾದಗಳು ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರಿಗಾಗಲೀ, ಇತರ ಸಿಬ್ಬಂದಿಗಾಗಲೀ ಸಂಬಂಧಪಡುವುದಿಲ್ಲ. ಗುತ್ತಿಗೆದಾರರ ಸಿಬ್ಬಂದಿಗಳಿಂದ ವೈಯಕ್ತಿಕ, ಸಮೂಹಿಕವಾಗಿ ಯಾವುದೇ ರೀತಿಯ ಅರ್ಜಿ ನಿವೇದನೆಗಳು ಶಸ್ತ್ರ ಚಿಕಿತ್ಸಕರು ಸ್ವೀಕಾರ ಮಾಡುವುದಿಲ್ಲ. ಒಂದು ವೇಳೆ ಇಂತಹ ಪತ್ರಗಳನ್ನು ಸಲ್ಲಿಸಿದರೂ ಸಹ ಅವು ಸ್ವಯಂ ತಿರಸ್ಕೃತವೆಂದು ಪರಿಗಣಿಸತಕ್ಕದ್ದು.
32. ಒಪ್ಪಂದದ ಪ್ರಕಾರ ಗುತ್ತಿಗೆದಾರರ ಸಂಸ್ಥೆಯು ವರ ಸಿಬ್ಬಂದಿಗಳ ಲೋಪದೋಷಕ್ಕೆ ಮತ್ತು ಅವರಿಂದ ಆಸ್ಪತ್ರೆಗೆ ಉಂಟಾಗುವ ತೊಂದರೆ ಅನಾನುಕೂಲಗಳಿಗೆ ನೇರ ಜವಾಬ್ದಾರರಾಗಿರುತ್ತಾರೆ.
33. ಗುತ್ತಿಗೆದಾರರು ನೇಮಿಸಿದ ಸಿಬ್ಬಂದಿಯವರು ರೋಗಿಗಳ ಜೊತೆಗೆ ಮತ್ತು ಆಸ್ಪತ್ರೆಯ ಸಿಬ್ಬಂದಿಯವರೊಡನೆ ಸೌಜನ್ಯದಿಂದ ವರ್ತಿಸುವಂತೆ ನೋಡಿಕೊಳ್ಳುವ ಜವಾಬ್ದಾರಿಯು ಗುತ್ತಿಗೆದಾರರಾಗಿರುತ್ತದೆ.
34. ಆಸ್ಪತ್ರೆಯಲ್ಲಿರುವ ಎಲ್ಲಾ ಕುರ್ಚಿ, ಮೇಜು, ಸ್ಟೂಲ್, ಮಂಚ, ಸಲೈನ್ ಸ್ಟ್ಯಾಂಡ್, ಬೇಡ್‌ಸೈಡ್ ಲಾಕರ್ಸ್ ರ‍್ಯಾಕ್ ಮುಂತಾದವುಗಳ ಸ್ವಚ್ಛತೆಗೆ ಗುತ್ತಿಗೆದಾರರು ಬ್ಬ ಪುರುಷ ನೌಕರರನ್ನು ಖಾಯಂ ನೇಮಿಸಬೇಕು.
35. ಗುತ್ತಿಗೆದಾರರ ಸಿಬ್ಬಂದಿಯ ಕರ್ತವ್ಯಲೋಪದಿಂದಾಗಿ ಯಾವುದೇ ಕಳವು ಇತ್ಯಾದಿ ಸಂಭಹವಿಸಿ ಆಸ್ಪತ್ರೆಗೆ ನಷ್ಟ ಉಂಟಾದಲ್ಲಿ ನಷ್ಟದ ಮೊಬಲಗನ್ನು ಟೆಂಡರುದಾರರ ಭದ್ರತಾ ಠೇವಣಿಯಿಂದ ಮುರಿದುಕೊಳ್ಳಲಾಗುವುದು.
36. ಟೆಂಡರುದಾರರು ಈ ಟೆಂಡರಿನಲ್ಲಿ ನಿಗದಿಪಡಿಸಿದ ಒಪ್ಪಂದದ ಕರಾರು ಪತ್ರದ ನಮೂದಿಸಿರುವ ನಿಬಂಧನೆಗಳಿಗೆ ಬದ್ಧರಾಗಿರುತ್ತಾರೆ. ಮಾತ್ರವಲ್ಲದೆ ಸ್ವಚ್ಛತೆ ಸಂಬಂಧ ಪಟ್ಟ ಇತರ ವೀಧಿ ವಿಧಾನಗಳನ್ನು ಕಾಲಕಾಲಕ್ಕೆ ವಿಧಿಸಲು ಜಿಲ್ಲಾ ಶಸ್ತ್ರ ಚಿಕಿತ್ಸಕರು ಅಧಿಕಾರಿ ಹೊಂದಿರುತ್ತಾರೆ.
37. ಟೆಂಡರುದಾರರು ಈ ನಿಬಂಧನೆಗಳನ್ನು ಹೊರತುಪಡಿಸಿ ಟೆಂಡರ್‌ನಲ್ಲಿ ಸೂಚಿಸಬಹುದಾದ ಯಾವುದೇ ನಿಬಂಧನೆಗಳನ್ನು ಪರಿಗಣಿಸುವುದಿಲ್ಲ. ಮತ್ತು ಹಾಗೇ ಸೂಚಿಸಿದಲ್ಲಿ ಅವು ಸ್ವಯಂ ತಿರಸ್ಕೃತ ಎಂದು ಪರಿಗಣಿಸಲಾಗುವುದು.
38. ಆಸ್ಪತ್ರೆಯ ಆವರಣದಲ್ಲಿರುವ ಎಲ್ಲಾ ವಸತಿಗೃಹಗಳ ಆವರಣವು ಸ್ವಚ್ಛತೆಗೊಳಿಸುವುದು.
39. ಟೆಂಡರುದಾರರು ಸ್ವಚ್ಛತೆಯ ಒಟ್ಟು ಗುತ್ತಿಗೆ ದರವನ್ನು ವಾರ್ಷಿಕವಾಗಿ ಸೂಚಿಸತಕ್ಕದ್ದು. ಟೆಂಡರ್ ಅಂಗೀಕೃತವಾದಲ್ಲಿ ಆ ಮೊತ್ತದ ಹನ್ನೇರಡನೇಯ ಒಂದು ಭಾಗಕ್ಕೆ ಪ್ರತಿ ತಿಂಗಳು ಐದನೇಯ ತಾರೀಖಿನ ಒಳಗೆ ಗುತ್ತಿಗೆದಾರರು ಹಣ ಪಾವತಿ ಪಡೆಯಲು ಬಿಲ್ಲನ್ನು ಸಲ್ಲಿಸಬೇಕು. ಟೆಂಡರುದಾರರು ಈ ಟೆಂಡರಿನ ಷರತ್ತು ಮತ್ತು ನಿಯಮಗಳಿಗೆ ಒಪ್ಪಿ ಸಹಮತವಿದ್ದಲ್ಲಿ ಮಾತ್ರ ಟೆಂಡರನ್ನು ಸಲ್ಲಿಸತಕ್ಕದ್ದು.

**ಡಾ: ಚಂದ್ರಕಾಂತ ಗುದಗೆ**
ಜಿಲ್ಲಾ ಶಸ್ತ್ರಚಿಕಿತ್ಸಕರು,
ಜಿಲ್ಲಾ ಆಸ್ಪತ್ರೆ ಬೀದರ್.

ಪಿ.ಡಿ. 12

**THE KARNATAKA BOARD OF WAKFS**
**'Darul Awkaf' No. 6, Cunningham Road, Bangalore-52**
**CORRIGENDUM**
**No. KTW/MSC/18/BDR/96-97, Dated 27th March 1997**

**Sub:** Correction of entries in the records of Jamia Masjid, Sunni, Andoors village, Bidar taluk and district.

**Preamble:-**

Whereas the institution Jamis Masjid, Andoors village, Bidar taluk and district has been notified at Sl. No.37 in the Gazetted list of Bidar taluk vide Notification No.MYW/244/RSB/72 dtd.2.4.1973 and published in Karnataka Gazette dtd.30.8.1973. Whereas the Chairman, D.W.C., Bidar, vide his letter No.DWC/MSC/7/BDR/96-97 dtd.19.6.1996 reported that the area of the said institution is wrongly mentioned as 44' x 28' feet instead of measuring East to west: 200' feet and North to South: 110 feet as per Revenue Records furnished by the Gram Panchayath, Andoor. Hence he has requested to correct the existing entries in respect of above institution.

Based on this a Public Notice was issued on 30.1.1997 calling objections or suggestions to the said proposed correction to be made in this behalf. Whereas the Chairman, Dist.Wakf Committee, Bidar, vide his letter No.DWC/MSC/7/BDR/96-97/3327 dtd.15.3.1997 alongwith Mahazar conducted by the Inspector-cum-Auditor has reported to this office to issue the Corrigendum since No objections or suggestions were received in this behalf within the stipulated period and this office has also not received objections in this behalf. Hence this Corrigendum.

In exercise of the powers conferred upon the Karnataka Board of Wakfs, Bangalore, under Section 41 of the Wakf Act 1995 the following Corrigendum is hereby issued

| Sl. No. | For the existing entries | | Sl. No. | Read the corrected entries |
|---|---|---|---|---|
| 37 | Name of the Wakf sunni or shia to be specified and location. | Description of wakf properties and particulars thereof Sy.No. House No.- Boundaries etc. | Name of wakf sunni or shia to be specified and location. | Description of wakf properties perticulars thereof such Sy.No.boundaries etc. |
| 37 | Jamia Mosque (sunni) Andoora village, Bidar taluk & District | 44' x 28' Feet | 37 Jamia Mosque (sunni) Andoora village, Bidar taluk and district | East to west: 200' feet North to South:110'feet |

Secretary,
P.D. 13 The Karnataka Board of Wakfs

**IN THE COURT OF THE IV ADDL. CITY CIVIL JUDGE, MAYOHALL, BANGALORE**
**P&SC : 15056/2005: CCH-21 HG:27th January 2006**

**Petitioners:-**

1. Smt. Sayamma
W/o Late Adlakanda Venkatesh,
Aged about 69 years, R/at, No. 2, N. Street,
Langford Road, Cross Road, Shanthinagar, Bangalore - 560 027.
2. Smt. Rathnamma
W/o Sri Keshavalu @ Channa Keshavalu,
Aged about 41 years, R/at, No.19, Food Garden Road,
Shanthinagar, Bangalore-560 027.
3. Sri Obelesu V.
S/o Late Adlakanda Venkatesh, Aged about 50 years,
R/at, No. 2/3, No. Street, Langford Road Cross Road,
Shanthinagar, Bangalore - 560 027.

**Respondents:-**
NIL

**PUBLIC NOTICE**

Notice is hereby given that a petition has been presented to this court under section 374 of the Indian Succession Act. For grant of Succession Certificate in respect of the amount due under the family pension scheme from I.I.C. and also to receive other connected amount, of the deceased Adlakanda Venkatesh who died on 23.11.1996 at Bangalore without leaving any will.

Be it known that no caveat has been entered and the above petition is posted for hearing on 15.2.06. All persons claiming to have any interest in the pension and other connected amounts of late Adlakanda Venkatesh may come and participate in the proceedings before grant of succession certificate to the petitioners.

Given under my hand and the seal of the court, this 18th day of January 2006.

By order of the Court,
P.D. 11 Assistant Registrar, City Civil Court, Mayo Hall Unit, Bangalore.

**ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ1:ಬಿಯುಡಿ:ಟೆಂಡರ್:ವಿವಿಧ:2005-06, ದಿನಾಂಕ: 17ನೇ ಜನವರಿ 2006**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕರ್ನಾಟಕ ರಾಜ್ಯಪಾಲರ ಪರವಾಗಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗರವರು 2005-06ನೇ ಸಾಲಿನಲ್ಲಿ ಈ ವಿಭಾಗದ ಕಾರ್ಗಲ್ ವನ್ಯಜೀವಿ ವಲಯದ ವ್ಯಾಪ್ತಿಗೆ ಒಳಪಡುವ ಗುಡವಿ ಪಕ್ಷಿಧಾಮದಲ್ಲಿ ವಿವಿಧ ಸ್ಥಳಗಳಲ್ಲಿ ಅನುಸೂಚಿಯಲ್ಲಿ ನಮೂದಿಸಿರುವ ವಿವಿಧ ಕಾಮಗಾರಿಗಳಿಗಾಗಿ, 2005-06ನೇ ಸಾಲಿನ ಈ ವಿಭಾಗದ ಅರಣ್ಯ ಗುತ್ತಿಗೆದಾರರಾಗಿದ್ದು, ಲೋಕೋಪಯೋಗಿ ಹಾಗೂ ನೀರಾವರಿ ಇಲಾಖೆಯ ಚಾಲ್ತಿ ವರ್ಷದ “ಸಿ” ಮತ್ತು “ಡಿ” ದರ್ಜೆ ಹಾಗೂ ಮೇಲ್ಪಟ್ಟ ದರ್ಜೆಯ

ನೊಂದಾಯಿತ ಗುತ್ತಿಗೆದಾರರಿಂದ ದಿನಾಂಕ: 14.2.2006 ರಂದು ಮಧ್ಯಾಹ್ನ 4.00 ಗಂಟೆಯವರೆಗೆ ಮೊಹರಾದ ಶೇಕಡಾವಾರು ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ಆಹ್ವಾನಿಸಲಾಗಿದೆ. ಮತ್ತು ಅದೇ ದಿನದಂದು ಸಂಜೆ 4.30 ಕ್ಕೆ ಈ ಕೆಳಗೆ ಸಹಿಮಾಡಿರುವುದರಿಂದ ಅಥವಾ ಅವರಿಂದ ಅಧಿಕಾರ ಹೊಂದಿದ ಅಧಿಕಾರಿಗಳ ಸಮಕ್ಷಮ ತೆರೆಯಲಾಗುವುದು.

**ಅನುಸೂಚಿ**

| ಘಟಕ ಸಂ. | ವಲಯ | ಕಾಮಗಾರಿ ವಿವರ | ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) | ಮುಂಗಡ ಠೇವಣಿ (ರೂ.ಗಳಲ್ಲಿ) | ಕಾಮಗಾರಿಯನ್ನು ಮುಕ್ತಾಯಗೊಳಿಸಬೇಕಾದ ದಿನಾಂಕ |
|---|---|---|---|---|---|
| 1 | ಕಾರ್ಗಲ್ ವನ್ಯಜೀವಿ ವಲಯ | ಗುಡವಿ ಪಕ್ಷಿಧಾಮದ ಸುತ್ತಲೂ ಚೈನ್‌ಲಿಂಕ್ ಮೆಶ್ ಬೇಲಿ ಹಾಕುವುದು | 5.00 | 12500.00 | 31.03.2006 |
| 2 | | ಸಾರ್ವಜನಿಕರಿಗೆ ಶೌಚಾಲಯ ನಿರ್ಮಾಣ ಮತ್ತು ಕುಡಿಯುವ ನೀರಿನ ಸೌಲಭ್ಯ ಕಲ್ಪಿಸುವುದು. | 3.00 | 7500.00 | 31.03.2006 |

**ಷರತ್ತುಗಳು**

1. ಟೆಂಡರ್ ಫಾರಂಗಳನ್ನು ದಿನಾಂಕ:14.2.2006 ರಂದು ಮದ್ಯಾಹ್ನ 1.30 ರವರೆಗೂ ವಿತರಿಸಲಾಗುವುದು. ಟೆಂಡರ್ ಫಾರಂ ಒಂದಕ್ಕೆ ರೂ. 1000.00 ಇದ್ದು, ಇದನ್ನು ಈ ಕೆಳಗೆ ಸಹಿಮಾಡಿದ ಅಧಿಕಾರಿಗಳ ಹೆಸರಿನಲ್ಲಿ ಪಡೆದ ಡಿ.ಡಿ. ಮೂಲಕ ದಿನಾಂಕ: 14.2.2006 ರಂದು ಕಛೇರಿ ವೇಳೆಯಲ್ಲಿ ಪಾವತಿಸಿ ಪಡೆಯಬಹುದಾಗಿದೆ. ಈ ಮೊಬಲಗನ್ನು ಹಿಂತಿರುಗಿಸುವುದಿಲ್ಲ. ಪ್ರತಿಯೊಂದು ಘಟಕಕ್ಕೂ ಪ್ರತ್ಯೇಕ ಟೆಂಡರ್ ಫಾರಂ ಅನ್ನು ಬಳಸತಕ್ಕದ್ದು.
2. ಟೆಂಡರ್‌ದಾರರು ಟೆಂಡರ್ ಫಾರಂನಲ್ಲಿ ತಮ್ಮ ದರವನ್ನು ನಮೂದಿಸುವಾಗ ಮಂಜೂರಾದ ಅನುಸೂಚಿ ದರದ ಮೇಲೆ ಶೇಕಡ ಇಂತಿಷ್ಟು ಕಡಿಮೆ ಅಥವಾ ಹೆಚ್ಚು ಎಂದು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ನಮೂದಿಸತಕ್ಕದ್ದು.
3. ಟೆಂಡರ್‌ದಾರರ ಹೆಸರು ಮತ್ತು ಟೆಂಡರ್ ಕೆಲಸದ ವಿವರಗಳನ್ನು ಒಳಗೊಂಡ ದೊಡ್ಡ ಅಕ್ಷರದಲ್ಲಿ ಬರೆದಿರುವ ಸೀಲ್ ಮಾಡಿದ ಲಕೋಟೆಯಲ್ಲಿ ಇರಿಸಿದ ಟೆಂಡರನ್ನು ಟೆಂಡರ್ ಪೆಟ್ಟಿಗೆಯೊಳಗೆ ದಿನಾಂಕ:14.2.2006 ರಂದು ಬೆಳಿಗ್ಗೆ 10.00 ಗಂಟೆಯಿಂದ 4.00 ಗಂಟೆಯ ಒಳಗೆ ಹಾಕತಕ್ಕದ್ದು. ಅದೇ ದಿನ ಮದ್ಯಾಹ್ನ 4.30ಕ್ಕೆ ಈ ಕೆಳಗೆ ಸಹಿಮಾಡಿದ ಅಧಿಕಾರಿಯಾಗಲಿ ಅಥವಾ ಇವರಿಂದ ಅಧಿಕಾರ ಪಡೆದ ಬೇರೆ ಅಧಿಕಾರಿ ಟೆಂಡರ್‌ದಾರರ ಅಥವಾ ಅವರಿಂದ ಅಧಿಕಾರ ಪಡೆದವರ ಸಮಕ್ಷಮದಲ್ಲಿ ಟೆಂಡರ್ ಪೆಟ್ಟಿಗೆಯನ್ನು ತೆರೆಯುತ್ತಾರೆ.
4. ಟೆಂಡರ್‌ದಾರರು, ಟೆಂಡರ್ ಫಾರಂನೊಂದಿಗೆ ಅನುಸೂಚಿಯಲ್ಲಿ ತಿಳಿಸಿದ ಕಾಮಗಾರಿಗೆ ನಿಗದಿಪಡಿಸಿದ ಇ.ಎಂ.ಡಿ., ಲೋಕೋಪಯೋಗಿ/ನೀರಾವರಿ/ಅರಣ್ಯ ಇಲಾಖೆಯ ಚಾಲ್ತಿ ವರ್ಷದ ಗುತ್ತಿಗೆ ನೊಂದಣಿಯ ದೃಢೀಕರಣ ಪತ್ರದ ನಕಲು, ಹಾಲಿ ಕೆಲಸ ನಿರ್ವಹಿಸುತ್ತಿರುವ ಕಾಮಗಾರಿಗಳ ದೃಢೀಕರಣ ಪತ್ರವನ್ನು ಲಗತ್ತಿಸಬೇಕು.
5. ಷರತ್ತುಗಳಿಗೊಳಪಟ್ಟ ಟೆಂಡರ್‌ಗಳನ್ನು, ತಂತಿಸಂದೇಶದ ಮೂಲಕ ಕಳುಹಿಸಿದ ಟೆಂಡರ್‌ಗಳನ್ನು ಅಥವಾ ಅಂಚೆ ಮೂಲಕ ಕಳುಹಿಸಿದ ಟೆಂಡರ್‌ಗಳನ್ನು ಯಾವುದೇ ಕಾರಣಕ್ಕೆ ಅಂಗೀಕರಿಸುವುದಿಲ್ಲ.
6. ಟೆಂಡರ್ ಫಾರಂನಲ್ಲಿ ಎಲ್ಲಾ ತಿದ್ದುಪಡಿಗಳು, ಹೊಡೆದು ಹಾಕಿರುವುದು, ಓವರ್ ರೈಟಿಂಗ್ ಮಾಡಿರುವುದು ಅಂಗೀಕಾರರ್ಹವಾಗಿರುವುದಿಲ್ಲ, ಕಪ್ಪು ಪಟ್ಟಿಯಲ್ಲಿ ಸೇರಿರುವ ಗುತ್ತಿಗೆದಾರರು ಟೆಂಡರ್ ಹಾಕಲು ಅರ್ಹರಾಗಿರುವುದಿಲ್ಲ. ಹಾಗೂ ಅಂತಹವುಗಳನ್ನು ತಿರಸ್ಕರಿಸಲಾಗುವುದು.
7. ಸಮಯ ಮೀರಿ ಸಲ್ಲಿಸುವ ಟೆಂಡರ್ ಹಾಗೂ ನಿಯಮಾನುಸಾರವಿಲ್ಲದ ಟೆಂಡರ್‌ಗಳನ್ನು ಯಾವುದೇ ಸೂಚನೆ ಇಲ್ಲದೆ ತಿರಸ್ಕರಿಸಲಾಗುವುದು.
8. ಟೆಂಡರ್‌ದಾರರು ಅವರ ಪೂರ್ತಿ ಹೆಸರು, ಸರಿಯಾದ ಅಂಚೆ ವಿಳಾಸ, ಸಂಪರ್ಕಿಸಬಹುದಾದ ದೂರವಾಣಿ ಸಂಖ್ಯೆ, ವಯಸ್ಸು ಮತ್ತು ಇತರ ಎಲ್ಲಾ ರೀತಿಯ ಪರಿಪೂರ್ಣ ಮಾಹಿತಿಗಳನ್ನು ಟೆಂಡರ್ ಫಾರಂನಲ್ಲಿ ಅವರ ಪೂರ್ಣ ಸಹಿಯೊಂದಿಗೆ ಭರ್ತಿ ಮಾಡತಕ್ಕದ್ದು.
9. ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಶೆಡ್ಯೂಲ್ ಬ್ಯಾಂಕಿನಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಪಡೆದ ಡಿ.ಡಿ. (ಡಿಮ್ಯಾಂಡ್ ಡ್ರಾಫ್ಟ್) ರೂಪದಲ್ಲಿ ಅನುಸೂಚಿಯಲ್ಲಿ ನಿಗದಿಪಡಿಸಿದ ಇ.ಎಂ.ಡಿ.ಯನ್ನು ಪ್ರತಿಯೊಂದು ಟೆಂಡರ್ ಫಾರಂನೊಂದಿಗೆ ಲಗತ್ತಿಸಿರಬೇಕು. ಇ.ಎಂ.ಡಿ. ಬಾಬ್ತು ನಗದಾಗಲೀ ಅಥವಾ ಚೆಕ್ಕುಗಳನ್ನಾಗಲೀ ಟೆಂಡರ್ ಫಾರಂನೊಂದಿಗೆ ಲಗತ್ತಿಸಿದಲ್ಲಿ ಅಂಥಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 61

## ಲೋಕೋಪಯೋಗಿ ಇಲಾಖೆ
## ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ
## ಟೆಂಡರ್ ಪ್ರಕಟಣೆ
## (ಎರಡು ಲಕೋಟೆ ಪದ್ದತಿಯಲ್ಲಿ)

**ನಂ.ಇಎನ್‌ಹೆಚ್/ಚಿ/ಸಇ-2/ಟೆಂ.ಪ್ರ./ನಿಯತಕಾಲಿಕ ನವೀಕರಣ/05-06/ ದಿನಾಂಕ: 31ನೇ ಜನವರಿ 2006**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೊಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ.

ಎರಡು ಲಕೋಟೆ ಪದ್ಧತಿಯಲ್ಲಿ (1) ತಾಂತ್ರಿಕ ಬಿಡ್ (ಭಾಗ-1) ಮತ್ತು (2) ಆರ್ಥಿಕ ಬಿಡ್ (ಭಾಗ-2) ಗಳಾಗಿರುತ್ತವೆ. ಬಿಡ್‌ಗಳನ್ನು ಎರಡು ಭಾಗಗಳಲ್ಲಿ ಎರಡು ಮೊಹರಾದ ಹಾಗೂ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ಪ್ರತ್ಯೇಕವಾಗಿ ನಮೂದಿಸಲ್ಪಟ್ಟ ಲಕೋಟೆಗಳನ್ನು ಮತ್ತೊಂದು ಮೊಹರಾದ ಲಕೋಟೆಯಲ್ಲಿಟ್ಟು ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: 13.3.2006 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66 ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ತಾಂತ್ರಿಕ ಬಿಡ್ ಭಾಗ-1 ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದಂಥ ಗುತ್ತಿಗೆದಾರರ ಆರ್ಥಿಕ ಬಿಡ್ ಲಕೋಟೆಗಳನ್ನು ಮಾತ್ರ ತೆರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರು ಕರೆ ಸಂಖ್ಯೆ: ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿಪಡಿಸಿದ ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ. ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ + ತೆರಿಗೆಗಳು (ಮರು ಪಾವತಿಯಾಗದ) | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1. | ರಾಷ್ಟ್ರೀಯ ಹೆದ್ದಾರಿ - 13 ಸೊಲ್ಲಾಪುರ - ಮಂಗಳೂರು ಸೆಕ್ಷನ್‌ನ ಕಿ.ಮೀ. 375 ರಿಂದ 386 ರವರೆಗೆ ನಿಯತಕಾಲಿಕ ನವೀಕರಣದ ಕಾಮಗಾರಿ. | 82.00 | ರೂ. 82,000/- | ರೂ. 8,000 + 12.5% ವ್ಯಾಟ್ | ಬಿಎಂ ಮತ್ತು ಎಸ್‌ಡಿಬಿಸಿ ಕಾಮಗಾರಿ | 2 ತಿಂಗಳು ಮಳೆಗಾಲ ಸಹಿತ |

**ಷರತ್ತುಗಳು:-** 1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿ.ಡಿ. ಯನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು, ಗುತ್ತಿಗೆದಾರರು ಗುತೇತಿಗೆದಾರರ ನೊಂದಾವಣಿ ಪತ್ರದ ಪ್ರತಿ, ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿಪಡಿಸಿದ ಯಂತ್ರೋಪಕರಣಗಳ ಮಾಲೀಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ,

| | | | |
|---|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಹಾಗೂ ಖಾಲಿ ಟೆಂಡರ್ ಫಾರಂಗಳನ್ನು ನೀಡುವ ಕೊನೆಯ ದಿನಾಂಕ | - | 10-03-2006 ರರರೆಗೆ (ಕಛೇರಿ ವೇಳೆಯಲ್ಲಿ) |
| ಆ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ | - | 13.3.2006 ಮಧ್ಯಾಹ್ನ 4.00 ಗಂಟೆಯ ವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಇ) | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | - | 13.3.2006 ಮಧ್ಯಾಹ್ನ 5.00 ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ) | ತಾಂತ್ರಿಕವಾಗಿ ಅರ್ಹವಾದ ಬಿಡ್‌ಗಳ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | - | 20.3.2006 ಮಧ್ಯಾಹ್ನ 5.00 ಗಂಟೆಯವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು.**

1. ಇಎಂಡಿ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ./ಎಫ್‌ಡಿಆರ್/ಪೇ-ಆರ್ಡರ್/ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ವನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು, ಇಎಂಡಿ ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡಲೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿಡಬ್ಲ್ಯೂಜಿ-66 ರಕ್ಕೆ ಅನುಗುಣವಾಗಿರತಕ್ಕದ್ದು.
2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀತಿಯ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು/ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ/ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು, ಇಎಂಡಿ/ಎಸ್‌ಡಿ ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.

3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು, ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 1) | 40/60 ಟಿಪಿಹೆಚ್ ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಎಸ್.ಆರ್.ಟಿ. ಅಂಡ್ ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ | ಒಂದು (1) | ಖರೀದಿಸಿದ ಇನ್ ವಾಯ್ಸ್ ಸೇಲ್ ಡೀಡ್ (ಖರೀದಿದಾರದಿಂದ ಪಡೆದ ಮೂಲ ಇನ್ವಾಯ್ಸ್‌ನೊಂದಿಗೆ) |
| 2) | ಪೇವರ್ ಫಿನೀಷರ್ | ಒಂದು (1) | - ಸದರಿ - |
| 3) | ವೈಬ್ರೇಟರಿ ರೋಲರ್ | ಒಂದು (1) | - ಸದರಿ - |
| 4) | ಸ್ಟ್ಯಾಟಿಕ್ ರೋಡ್ ರೋಲರ್ | ಎರಡು (2) | - ಸದರಿ - |
| 5) | ಮೆಕ್ಯಾನಿಕಲ್ ಸ್ಪೇಯರ್ | ಎರಡು (2) | - ಸದರಿ - |
| 6) | ಓಪ್ಪರ್‌ಗಳು | ನಾಲ್ಕು (4) | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |
| 7) | ಎಕ್ಸ್‌ಕವೇಟರ್ | ಒಂದು (1) | ಮಾಲೀಕತ್ವದ ಪ್ರಮಾಣ ಪತ್ರ |

4. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು, ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು, ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
5. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್ ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು, "ಲೈನ್ ಆಫ್ ಕ್ರೆಡಿಟ್ ಅನ್ನು" ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
6. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸಿರುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು ಮೂಲ ದಾಖಲಾತಿಗಳನ್ನು ಪರಿಸೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.
7. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತಚು ವಿವರಣೆಗಳನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು, ಕಂಪನಿಯ ವಿವರಗಳು/ಏಜೆನ್ಸಿಗಳು/ಸಂಸ್ಥೆಯ ಪ್ರೊಫೈಲ್ ಅನ್ನು ಲಗತ್ತಿಸತಕ್ಕದ್ದು.
8. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
9. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
10. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
11. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಬಿ. ಪ್ರಭಾಕರ ಶೆಟ್ಟಿ**

ಪಿ.ಆರ್. 68 ಕಾರ್ಯಪಾಲಕ ಅಭಿಯಂತರರು, ರಾ.ಹೆ. ವಿಭಾಗ, ಚಿತ್ರದುರ್ಗ.

**ಲೋಕೋಪಯೋಗಿ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನೀಯರ್‌ರವರ ಕಛೇರಿ, ಕೋಲಾರ ವಿಭಾಗ, ಕೋಲಾರ**

**ಟೆಂಡರ್ ತಿದ್ದುಪಡಿ**

**ಟೆಂಡರ್ ತಿದ್ದುಪಡಿ ಅಧಿಸೂಚನಾ ಸಂಖ್ಯೆ:29(ಎ)/2005-06/ದಿನಾಂಕ:18ನೇ ಜನವರಿ 2006**

**ಉಲ್ಲೇಖ: ಈ ವಿಭಾಗದ ಟೆಂಡರ್ ಅಧಿಸೂಚನಾ ಸಂಖ್ಯೆ:29/05-06/ದಿನಾಂಕ:31.12.2005.**

ಮೇಲ್ಕಂಡ ಉಲ್ಲೇಖ ಟೆಂಡರ್ ಅಧಿಸೂಚನೆಯಲ್ಲಿ, ಸಿ.ಆರ್.ಎಫ್. ಯೋಜನೆಯಡಿ ಕ್ರಮ ಸಂಖ್ಯೆ 3 ರ ಕಾಮಗಾರಿಯಾದ **'ಕೋಲಾರ ಜಿಲ್ಲೆ ಚಿಂತಾಮಣಿ ತಾಲ್ಲೂಕು ಚಿಂತಾಮಣಿ ಚೀಳೂರು ರಸ್ತೆಯ** ಸರಪಳಿ 1.00 ರಿಂದ 16.00 ಕಿಮೀವರೆಗೆ ಅಭಿವೃದ್ಧಿ ಕಾಮಗಾರಿ ಎಂದು ಪ್ರಕಟಣೆಗೊಳಿಸಲಾಗಿತ್ತು. ಆದರೆ ಸದರಿ ಕಾಮಗಾರಿಯ **ಸರಪಳಿಯನ್ನು 21.40 ರಿಂದ 28.75 ಕಿಮೀವರೆಗೆ ಅಭಿವೃದ್ಧಿ ಕಾಮಗಾರಿ** ಎಂದು ಮಾರ್ಪಡಿಸಿ ತಿದ್ದುಪಡಿ ಮಾಡಲಾಗಿದೆ. ಉಳಿಕೆ ಯಾವುದೇ ಬದಲಾವಣೆ ಇರುವುದಿಲ್ಲ. ಹೆಚ್ಚಿನ ವಿವರಗಳಿಗೆ ಈ ಕಛೇರಿಯನ್ನು ಕೆಲಸದ ವೇಳೆಯಲ್ಲಿ ಕೆಲಸದ ದಿನಾಂಕಗಳಂದು ಪಡೆಯಲು ಕೋರಲಾಗಿದೆ.

ಕಾರ್ಯಪಾಲಕ ಇಂಜಿನಿಯರ್,

ಪಿ.ಆರ್. 64 ಲೋ.ಇ. ಕೋಲಾರ ವಿಭಾಗ, ಕೋಲಾರ.